## ಒಳಾಡಳಿತ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಒಇ 104 ಕಸೈಸೇ 2008, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್, 2008**

ಉತ್ತರ ಕನ್ನಡ ಜಿಲ್ಲಾ ಸೈನಿಕ ಮಂಡಳಿ ಕಾರವಾರ ಇಲ್ಲಿ ಈ ಕೆಳಗೆ ಕಾಣಿಸಿರುವ ಅಧಿಕಾರಿ: ಅಧಿಕಾರೇತರ ಸದಸ್ಯರನ್ನೊಳಗೊಂಡ ಸಮಿತಿಯನ್ನು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಪುನರ್ ರಚಿಸಲಾಗಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಉತ್ತರಕನ್ನಡ. | ಅಧ್ಯಕ್ಷರು |
| 2. | ಸ್ಕ್ವಾಡ್ರನ್ ಲೀಡರ್, ಎಸ್.ಎಫ್. ಗಾಂವಕರ್ (ನಿವೃತ್ತ) ಗೋಸಾಯಿವಾಡ, ಅಂಚೆ–ಸದಾಶಿವನಗರ, ಉತ್ತರಕನ್ನಡ–570026. | ಉಪಾಧ್ಯಕ್ಷರು |
| 3. | ಉಪ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಉತ್ತರಕನ್ನಡ ಜಿಲ್ಲೆ, ಕಾರವಾರ. | ಕಾರ್ಯದರ್ಶಿಗಳು |

**ಅಧಿಕಾರಿ ಸದಸ್ಯರು**

4) ಆರಕ್ಷಕ ಅಧೀಕ್ಷಕರು, ಉತ್ತರಕನ್ನಡ ಜಿಲ್ಲೆ, ಕಾರವಾರ.

5) ಉಪ ಕಾರ್ಯದರ್ಶಿಗಳು, (ಅಭಿವೃದ್ಧಿ) ಜಿಲ್ಲಾ ಪಂಚಾಯತ್, ಕಾರವಾರ.

6) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಾರವಾರ.

7) ಸಹಕಾರಿ ಸಂಘಗಳ ಉಪ ನೋಂದಣಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ.

8) ಜಿಲ್ಲಾ ಉದ್ಯೋಗಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

9) ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿಗಳ ಕಾರ್ಯಾಲಯ, ಉತ್ತರ ಕನ್ನಡ ಜಿಲ್ಲೆ, ಕಾರವಾರ.

10) ಮುಖ್ಯ ವ್ಯವಸ್ಥಾಪಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿರವಾಡ.

11) ಪ್ರೋಜೆಕ್ಟ್ ಸೀಬರ್ಡ್ ನಿಂದ ಒಬ್ಬರು ಅಧಿಕಾರಿಗಳು.

12) ಸಾರಿಗೆ ಅಧಿಕಾರಿಗಳು, ಕಾರವಾರ.

**ಅಧಿಕಾರೇತರ ಸದಸ್ಯರು**

1) ಮಾಜಿ ಸುಬೇದಾರ್ ಮೇಜರ್ ಬಾಲಕೃಷ್ಣ ಕೆ.ಭಟ್, ಓಂ ಶ್ರೀ ಬಿಲ್ಡಿಂಗ್, ಮುಕ್ಕಾಂ–ಶೇಡಗೇರಿ ಅಂಚೆ: ಮತ್ತು ತಾಲ್ಲೂಕು ಅಂಕೋಲಾ–081314.

2) ಮಾಜಿ ನಾಯ್ಕ ವಿಘ್ನೇಶ್ವರ ಭಟ್, ಹಿಟ್ಟಿನಬೈಲ್, ಕಣ್ಣಿಗೇರಿ, ತಾಲ್ಲೂಕು, ಯಲ್ಲಾಪುರ, ಉತ್ತರಕನ್ನಡ ಜಿಲ್ಲೆ, ಕಾರವಾರ.

3) ಮಾಜಿ ಸಿಪಿಎಲ್ ಗೋಳಿ ಅಣ್ಣಪ್ಪನಾಯ್ಕ, "ನಂದ ಗೋಕುಲ" ಸಾಕೀನ, ನನ್ನಳ್ಳಿ ಅಂಚೆ, ಕುಮಾಟಾ–581343 ಉತ್ತರ ಕನ್ನಡ ಜಿಲ್ಲೆ.

ಈ ಸಮಿತಿಯ ಅಧಿಕಾರೇತರ ಸದಸ್ಯರುಗಳ ಪ್ರಯಾಣ ಮತ್ತು ದಿನಭತ್ಯೆಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ಅನುಬಂಧ(ಎ) ನಲ್ಲಿ ವರ್ಗೀಕೃತ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇನಾಯತ್ ಉಲ್ಲಾ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸಹಾಯಕ ಸೇವೆಗಳು)

ಪಿ.ಆರ್.1264

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್.ಸಿ–34/2006**

**ಅರ್ಜಿದಾರರು:** **ಪ್ರತಿವಾದಿಗಳು:**

ಶ್ರೀಮತಿ ಸಂಗೀತಾ **ವಿರುದ್ಧ** ಆಡಳಿತ ವರ್ಗ ಬಿ.ಜಿ.ಎಂ.ಎಲ್. ಕೆ.ಜಿ.ಎಫ್.

ತಂದೆ: ಲೇಟ್ ಎಂ. ಶಂಕರ್, ಇ.ಟಿ. ಬ್ಲಾಕ್,

ಊರಿಗಾಂ ಕೆ.ಜಿ.ಎಫ್.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸಂಗೀತಾ ಅವರು ತಮ್ಮ ತಂದೆ ಲೇಟ್ ಎಂ. ಶಂಕರ್ ಅವರು ಪ್ರತಿವಾದಿ ಬಿ.ಜಿ.ಎಂ.ಎಲ್. ಕೆ.ಜಿ.ಎಫ್. ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:01.11.1995 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:07.11.2008 ರಂದು ನೀಡಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.1261

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ: ಕಾನಪ:ಸಿಆರ್–200/08, ದಿನಾಂಕ:30ನೇ ಸೆಪ್ಟೆಂಬರ್, 2008**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ತಾರಾಬಾಯಿ ಕೋಂ ಕಂಡೇರಾವ್ ಚೌವ್ಹಾಣ್.<br>2) ಧನಶ್ರೀ ಬಿನ್ ಬಾಲು @ ಬಲಸೋ ಚೌವ್ಹಾಣ್ 12 ವರ್ಷ.<br>3) ಭಾಗ್ಯಶ್ರೀ ಬಿನ್ ಬಾಲು @ ಬಾಲಸೋ ಚೌವ್ಹಾಣ್.10 ವರ್ಷ ವಯಸ್ಸು.<br>4) ಸತೀಶ್ ಬಿನ್ ಬಾಲು @ ಬಾಲಸೋ ಚೌವ್ಹಾಣ್. 8 ವರ್ಷ ವಯಸ್ಸು. ನಾಯಗನ್ ಜಿಲ್ಲೆ: ಸತಾರ: ಮಹಾರಾಷ್ಟ್ರ ರಾಜ್ಯ. | **ವಿರುದ್ಧ** | 1) ಪ್ರಕಾಶ್ ಶಾನ್‌ಬಾಗ್ ಬಿನ್ ನಾರಾಯಣ್ ಶಾನ್‌ಬಾಗ್, ಡೈರೆಕ್ಟರ್ ಮೆ: ಎಸ್.ಐ.ಟಿ.ಎಸ್. ಎಕ್ಸ್‌ಪ್ರೆಸ್ ಪ್ರೈ.ಲಿ. ನಂ.21 ಶಕ್ತಿ ಸಧನ ಲ್ಯಾಮಿಂಗ್‌ಟನ್ ರಸ್ತೆ, ಮುಂಬೈ–400007. ಮಾಲೀಕರು ಗೂಡ್ಸ್ ಟ್ರಕ್ ನಂ.ಎಂ.ಹೆಚ್.04–ಸಿ.ಪಿ.8156.<br>2) ದಿ ಡಿವಿಜನಲ್ ಮ್ಯಾನೇಜರ್, ಓರಿಯೆಂಟಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್ ಎನ್ಕ್ ಕಾಂಪ್ಲೆಕ್ಸ್ ಕೇಶವಪುರ, ಹುಬ್ಬಳ್ಳಿ. |

**ಪ್ರಕಟಣೆ**

ಶ್ರೀ: ಶ್ರೀಮತಿ ತಾರಾಬಾಯಿ, ಧನಶ್ರೀ, ಭಾಗ್ಯಶ್ರೀ, ಸತೀಶ್ ಇವರುಗಳಾದ ನಾವು ಮೃತ ಬಾಲು @ ಬಾಲಸೋಚೌವ್ಹಣ್ ಇವರ ತಾಯಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಾಲು @ ಬಾಲಸೋ ಚೌವ್ಹಣ್ ರವರು ಒಂದನೇ ಪ್ರತಿವಾದಿಗಳಾದ ಪ್ರಕಾಶ್ ಶಾನಭಾಗ್ ಇವರ ಗೂಡ್ಸ್ ಟ್ರಕ್ ರಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದರಿಂದ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1268